# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 260

ಉತ್ತರ ದಿನಾಂಕ : 16.07.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಶುದ್ದ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲಾಗಿದೆ; ಇನ್ನೂ ಎಷ್ಟು ಕಡೆ ಘಟಕಗಳಿಗೆ ಬೇಡಿಕೆ ಇದೆ; ಇದಕ್ಕೆ ಖರ್ಚು ಮಾಡಿರುವ ಹಣವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ 2017-18 ಮತ್ತು 2018-19 ನೇ ಸಾಲಿನಲ್ಲಿ ಒಟ್ಟು 242 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, ಅದರಲ್ಲಿ 202 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅನುಷ್ಠಾನಗೊಳಿಸಲಾಗಿದೆ, ಉಳಿದ ಘಟಕಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತದೆ ಮತ್ತು ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಎರಡು ವರ್ಷಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅನುಷ್ಠಾನಗೊಳಿಸಲು ಒಟ್ಟಾರೆಯಾಗಿ ರೂ.1462.68 ಲಕ್ಷಗಳ ವೆಚ್ಚವಾಗಿರುತ್ತದೆ. ತಾಲ್ಲೂಕುವಾರು ವಿವರ ಕೆಳಕಂಡಂತಿದೆ. |

| ಕ್ರ ಸಂ. | ತಾಲ್ಲೂಕು | ಅನುಮೋದನೆ ಯಾಗಿರುವ ಘಟಕಗಳ ಸಂಖ್ಯೆ | ಪ್ರಗತಿಯಲ್ಲಿರುವ ಘಟಕಗಳ ಸಂಖ್ಯೆ | ಅನುಷ್ಠಾನಗೊಳಿಸಿರುವ ಘಟಕಗಳ ಸಂಖ್ಯೆ | ವೆಚ್ಚ ರೂ.ಲಕ್ಷಗಳಲ್ಲಿ |
|---|---|---|---|---|---|
| 1 | ಹೆಚ್.ಡಿ.ಕೋಟೆ | 12 | 01 | 11 | 105.01 |
| 2 | ಹುಣಸೂರು | 25 | 00 | 25 | 228.27 |
| 3 | ಕೆ.ಆರ್.ನಗರ | 34 | 02 | 32 | 293.02 |
| 4 | ಮೈಸೂರು | 46 | 08 | 38 | 137.46 |
| 5 | ನಂಜನಗೂಡು | 23 | 03 | 20 | 142.92 |
| 6 | ಪಿರಿಯಾಪಟ್ಟಣ | 39 | 01 | 38 | 306.77 |
| 7 | ಟಿ.ನರಸೀಪುರ | 63 | 25 | 38 | 249.23 |
| | ಒಟ್ಟು | **242** | **40** | **202** | **1462.68** |

2019-20ನೇ ಸಾಲಿನಲ್ಲಿ ಮೈಸೂರು ಜಿಲ್ಲೆ ಗ್ರಾಮೀಣ ಜನವಸತಿಗಳಿಗೆ 35 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು ಪ್ರಸ್ತಾವನೆ ಬಂದಿರುತ್ತದೆ. ಅನುದಾನದ ಲಭ್ಯತೆ ಮೇರೆಗೆ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲಾಗುವುದು.

ಚಾಮರಾಜನಗರ ಜಿಲ್ಲೆಗೆ ಸಂಬಂಧಿಸಿದಂತೆ 2017-18 ಮತ್ತು 2018-19 ನೇ ಸಾಲಿನಲ್ಲಿ ಒಟ್ಟು 90 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, ಅದರಲ್ಲಿ 19 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅನುಷ್ಠಾನಗೊಳಿಸಲಾಗಿದೆ, ಉಳಿದ ಘಟಕಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತದೆ ಮತ್ತು ಚಾಮರಾಜನಗರ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಎರಡು ವರ್ಷಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅನುಷ್ಠಾನಗೊಳಿಸಲು ಒಟ್ಟಾರೆಯಾಗಿ ರೂ.359.37 ಲಕ್ಷಗಳ ವೆಚ್ಚವಾಗಿರುತ್ತದೆ. ತಾಲ್ಲೂಕುವಾರು ವಿವರ ಕೆಳಕಂಡಂತಿದೆ.

| ಕ್ರ.ಸಂ. | ತಾಲ್ಲೂಕು | ಅನುಮೋದನೆ ಯಾಗಿರುವ ಘಟಕಗಳ ಸಂಖ್ಯೆ | ಪ್ರಗತಿ ಯಲ್ಲಿರುವ ಘಟಕಗಳ ಸಂಖ್ಯೆ | ಅನುಷ್ಠನಗೊಳಿಸಿರುವ ಘಟಕಗಳ ಸಂಖ್ಯೆ | ವೆಚ್ಚ ರೂ. ಲಕ್ಷಗಳಲ್ಲಿ |
|---|---|---|---|---|---|
| 1 | **ಚಾಮರಾಜನಗರ** | 62 | 45 | 17 | 283.71 |
| 2 | **ಗುಂಡ್ಲುಪೇಟೆ** | 2 | 02 | 00 | 11.60 |
| 3 | **ಕೊಳ್ಳೇಗಾಲ** | 13 | 13 | 00 | 29.20 |
| 4 | **ಯಳಂದೂರು** | 13 | 11 | 02 | 34.86 |
| | ಒಟ್ಟು | **90** | **71** | **19** | **359.37** |

2019-20ನೇ ಸಾಲಿನಲ್ಲಿ ಚಾಮರಾಜನಗರ ಜಿಲ್ಲೆಗೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸುವ ಪ್ರಸ್ತಾವನೆಯು ಗಮನಕ್ಕೆ ಬಂದಿರುವುದು.

| | | |
|---|---|---|
| ಆ) | ಎಷ್ಟು ಕುಡಿಯುವ ನೀರಿನ ಘಟಕಗಳು ದುರಸ್ಥಿಯಲ್ಲಿದೆ; ಅವುಗಳನ್ನು ದುರಸ್ಥಿಗೊಳಿಸಲು ಎಷ್ಟು ಹಣ ಖರ್ಚಾಗಿದೆ; | ಮೈಸೂರು ಜಿಲ್ಲೆಯಲ್ಲಿ ಒಟ್ಟಾರೆ 580 ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲಾಗಿದ್ದು, ಈ ಪೈಕಿ 3 ನೀರು ಶುದ್ಧೀಕರಣ ಘಟಕಗಳು ದುರಸ್ಥಿಯಲ್ಲಿರುತ್ತವೆ. ಸದರಿ ಘಟಕಗಳನ್ನು ಸುಸ್ಥಿತಿಗೆ ತರಲು ಕ್ರಮ ವಹಿಸಲಾಗುವುದು.<br>ಚಾಮರಾಜನಗರ ಜಿಲ್ಲೆಯಲ್ಲಿ ಒಟ್ಟಾರೆ 168 ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲಾಗಿದ್ದು, ಈ ಪೈಕಿ 12 ನೀರು ಶುದ್ಧೀಕರಣ ಘಟಕಗಳು ದುರಸ್ಥಿಯಲ್ಲಿರುತ್ತವೆ. ದುರಸ್ಥಿ ಮತ್ತು ಕಾರ್ಯಾಚರಣೆಯನ್ನು ಘಟಕವನ್ನು ಅಳವಡಿಸಿರುವ ಮೂಲ ಗುತ್ತಿಗೆದಾರರೇ ಘಟಕವನ್ನು ಅಳವಡಿಸಿದ ದಿನದಿಂದ ಮುಂದಿನ 05 ವರ್ಷದವರೆಗೆ ನಿರ್ವಹಿಸುತ್ತಿದ್ದು. |
| ಇ) | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು 2018–19 ನೇ ಸಾಲಿಗೆ ಎಷ್ಟು ಅನುದಾನ ಒದಗಿಸಲಾಗಿದೆ? | ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು 2018–19ನೇ ಸಾಲಿಗೆ ಒಟ್ಟಾರೆಯಾಗಿ ರೂ.1123.51 ಲಕ್ಷಗಳ ಅನುದಾನ ಒದಗಿಸಲಾಗಿತ್ತು.<br>ಚಾಮರಾಜನಗರ ಜಿಲ್ಲೆಗೆ ಸಂಬಂಧಿಸಿದಂತೆ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲು 2018–19ನೇ ಸಾಲಿಗೆ ಒಟ್ಟಾರೆಯಾಗಿ ರೂ.380.47 ಲಕ್ಷಗಳ ಅನುದಾನ ಒದಗಿಸಲಾಗಿತ್ತು. |

ಸಂ:ಗ್ರಾಕುನೀ&ನೈಇ 86 ಗ್ರಾನೀಸ(3)2019

(ಕೃಷ್ಣ ಬೈರೇಗೌಡ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೃಷ್ಣ ಬೈರೇಗೌಡ
ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್
ಸಚಿವರು